ಅರ್ಹ ಸೇವಾ ನಿರತ ಶುಶ್ರೂಷಕರು:ಹಿಮಆಸ ಇವರುಗಳು ಅರ್ಜಿ ಸಲ್ಲಿಸಲು ಈ ಕೆಳಕಂಡ ಅರ್ಹತೆಗಳನ್ನು ಹೊಂದಿರಬೇಕು.

1) ಕನಿಷ್ಟ 5 ವರ್ಷಗಳ ನಿರಂತರ ಸೇವೆಯನ್ನು ಪೂರೈಸಿರಬೇಕು.

2) ಖಾಯಂ ಪೂರ್ವಾಸೇವಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರಬೇಕು.

3) ಅರ್ಜಿಗಳನ್ನು ಸ್ವೀಕರಿಸಲು ಕಡೆಯ ದಿನಾಂಕಕ್ಕೆ 48 ವರ್ಷಗಳ ವಯೋಮಿತಿಯೊಳಗಿರಬೇಕು.

4) ಇಲಾಖಾ ವಿಚಾರಣೆ ಬಾಕಿ ಇದೆಯೇ ಅಥವಾ ಇಲ್ಲವೇ ಎಂಬುದರ ಬಗ್ಗೆ ಮೇಲಾಧಿಕಾರಿಗಳಿಂದ ಪಡೆದ ಧೃಢೀಕರಣ ಪತ್ರವನ್ನು ಸಲ್ಲಿಸಬೇಕು.

5) ಅಭ್ಯರ್ಥಿಗಳು ಅಂಗೀಕೃತ ವಿಶ್ವವಿದ್ಯಾಲಯದಿಂದ ಪಡೆದಿರುವ ಬಿಎಸ್‌ಸಿ (ನ) ಅಥವಾ ಪಿಸಿ ಬಿಎಸ್‌ಸಿ (ನ) ವಿದ್ಯಾರ್ಹತೆ ಹೊಂದಿರತಕ್ಕದ್ದು.

ಸದರಿ ವ್ಯಾಸಂಗಕ್ಕೆ ಅರ್ಜಿಯನ್ನು ಸಲ್ಲಿಸಲು ಇಚ್ಛಿಸುವ ಸೇವಾ ನಿರತ ನೌಕರರು ನಿಗದಿತ ಅರ್ಜಿಯನ್ನು ಪ್ರಾಂಶುಪಾಲರ ಕಛೇರಿ, ಶುಶ್ರೂಷಾ ಮಹಾವಿದ್ಯಾಲಯ, ಕೋಟೆ ಬೆಂಗಳೂರು ಇವರಿಂದ ರೂ. 400-00, ಎಸ್‌ಸಿ:ಎಸ್‌ಟಿ ಅಭ್ಯರ್ಥಿಗಳಿಗೆ ರೂ. 100-00 ರ ಹುಂಡಿಯನ್ನು (ಡಿಡಿ) ಸಲ್ಲಿಸಿ ಅರ್ಜಿಯನ್ನು ಪಡೆಯಬಹುದಾಗಿರುತ್ತದೆ.

ಅರ್ಜಿ ಫಾರಂಗಳನ್ನು ದಿನಾಂಕ 8-4-2004 ರಿಂದ 19-4-2004 ಸಂಜೆ 4-00 ಗಂಟೆಯ ಒಳಗೆ ಎಲ್ಲಾ ಕೆಲಸದ ದಿನಗಳಲ್ಲಿ ಪಡೆಯಬಹುದಾಗಿದೆ.

ಅರ್ಜಿಯೊಂದಿಗೆ ಅಭ್ಯರ್ಥಿಯು ತಮ್ಮ ವಿದ್ಯಾಭ್ಯಾಸದ ಹಾಗೂ ಸೇವಾ ಪ್ರಮಾಣ ಪತ್ರಗಳ ದಾಖಲಾತಿಗಳನ್ನು ಲಗತ್ತಿಸಬೇಕು.

ಎಲ್ಲಾ ವಿವರಗಳನ್ನೊಳಗೊಂಡ ಅರ್ಜಿಗಳನ್ನು ಮೇಲಾಧಿಕಾರಿಗಳ ಮುಖಾಂತರ ಪ್ರಾಂಶುಪಾಲರು, ಸರ್ಕಾರಿ ಶುಶ್ರೂಷಾ ಮಹಾ ವಿದ್ಯಾಲಯ, ಬೆಂಗಳೂರು ಇವರಿಗೆ ಖುದ್ದಾಗಿ ಅಥವಾ ಅಂಚೆ ಮೂಲಕವಾಗಲಿ ದಿನಾಂಕ 21-4-2004 ರ ಸಂಜೆ 4-00 ಗಂಟೆಯೊಳಗಾಗಿ ತಲುಪುವಂತೆ ಸಲ್ಲಿಸತಕ್ಕದ್ದು. ತದನಂತರ ಬಂದ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಸ್ವೀಕರಿಸುವುದಿಲ್ಲ.

ಪಿ.ಆರ್. 166 ವೈದ್ಯಕೀಯ ಶಿಕ್ಷಣ ನಿರ್ದೇಶಕರು, ಬೆಂಗಳೂರು.

## ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

## ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಸಿಟಿ ಸಿವಿಲ್ ಕೋರ್ಟ್ ಸಂಕೀರ್ಣ, ನೆಲಮಹಡಿ, ದಕ್ಷಿಣಭಾಗ, ಬೆಂಗಳೂರು

### ಅಧಿಸೂಚನೆ ನಗದು ಶಾಖೆ ನಂ:16:86-87, ದಿನಾಂಕ: 2ನೇ ಏಪ್ರಿಲ್ 2004

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಅಂಬಾಸಿಡರ್ ಕಾರು ನಂ:ಸಿ.ಕೆ.ಜಿ. 250 ಟೆಂಡರ್ ಸಹಿತ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಸಾರ್ವಜನಿಕರ ಮಾಹಿತಿಗಾಗಿ ಈ ಮೂಲಕ ತಿಳಿಯಪಡಿಸುವುದೇನೆಂದರೆ, ನಗರ ಸಿವಿಲ್ ನ್ಯಾಯಾಲಯಗಳ ಸಂಕೀರ್ಣ, ಬೆಂಗಳೂರು ಈ ಕಟ್ಟಡದ ದಕ್ಷಿಣಭಾಗದ ನೆಲಮಹಡಿಯಲ್ಲಿರುವ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಕಛೇರಿಯ ನೋಂದಣಿ ಸಂಖ್ಯೆ: ಸಿಕೆಜಿ 250 ಇರುವ ಅಂಬಾಸಿಡರ್ ಕಾರನ್ನು "ಈಗ ಯಾವ ಸ್ಥಿತಿಯಲ್ಲಿದೆಯೋ ಅದೇ ಸ್ಥಿತಿಯಲ್ಲಿ" ಟೆಂಡರ್ ಮತ್ತು ಸಾರ್ವಜನಿಕ ಬಹಿರಂಗ ಹರಾಜು (Tender-Cum-Public Auction) ಮೂಲಕ ನ್ಯಾಯಾಲಯದ ಕಛೇರಿಯ ಆವರಣದಲ್ಲಿ ದಿನಾಂಕ 3.6.2004 ರಂದು ಬಹಿರಂಗವಾಗಿ ವಿಲೇವಾರಿ ಮಾಡಲಾಗುವುದು.

| ಕ್ರ. ಸಂ. | ವಾಹನದ ನೋಂದಣಿ ಸಂಖ್ಯೆ. | ಮಾಡೆಲ್ | ಖರೀದಿಸಿದ ವರ್ಷ | ಸರ್ಕಾರಿ ಬೆಲೆ | ವಾಹನದ ಸ್ಥಿತಿ |
|---|---|---|---|---|---|
| 1 | ಸಿ.ಕೆ.ಜಿ. 250 | 1986 | 1986 | 25,000 | ಚಾಲನೆಯಲ್ಲಿ ಇಲ್ಲ |

### ಬಹಿರಂಗ ಹರಾಜಿನ ಷರತ್ತು ಮತ್ತು ನಿಬಂಧನೆಗಳು

1) ಮೊಹರು ಮಾಡಿದ ಟೆಂಡರ್ (ಸೀಲ್ಡ್ ಟೆಂಡರ್) ಲಕೋಟೆಯನ್ನು "ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು" ಇವರ ವಿಳಾಸಕ್ಕೆ ದಿನಾಂಕ 3.6.2004 ರ ಬೆಳಿಗ್ಗೆ 10-30 ಘಂಟೆಯೊಳಗೆ ತಲುಪುವಂತೆ ನೋಂದಣಿ ಅಂಚೆ ಮೂಲಕ ಕಳುಹಿಸಿಕೊಡಬೇಕು. ಅಥವಾ ಖುದ್ದಾಗಿ ಸಲ್ಲಿಸಿ ಸ್ವೀಕೃತಿಯನ್ನು ಪಡೆಯಬೇಕು. ಲಕೋಟೆಯ ಮೇಲೆ "ವಾಹನ ಸಂಖ್ಯೆ ಸಿಕೆಜಿ 250 ಖರೀದಿಸುವ ಬಗ್ಗೆ ಟೆಂಡರ್" ಎಂಬುದಾಗಿ ಬಿಡಿ ಅಕ್ಷರಗಳಲ್ಲಿ ಸ್ಪಷ್ಟವಾಗಿ ನಮೂದಿಸಬೇಕು. ಟೆಂಡರ್ ಫಾರ್ಮನ್ನು ಕಛೇರಿಯ ವೇಳೆಯಲ್ಲಿ ದಿನಾಂಕ: 31.5.2004 ರ ಸಾಯಂಕಾಲ 5-30ರೊಳಗಾಗಿ ಯಾವುದೇ ಕೆಲಸದ ದಿನದಂದು ಪಡೆಯಬಹುದು.

2) ಪ್ರತಿಯೊಬ್ಬ ಟೆಂಡರುದಾರರು:ಸವಾಲುದಾರರು ರೂ. 2,000-00 (ರೂಪಾಯಿ ಎರಡು ಸಾವಿರ) ಗಳ ಠೇವಣಿ ಹಣವನ್ನು "ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು" ಈ ಹೆಸರಿಗೆ ತೆಗೆಯಿಸಿದ ಡಿ.ಡಿ. ಮೂಲಕ ಟೆಂಡರ್ ಅರ್ಜಿಯ ಜೊತೆಗೆ ಪಾವತಿಸತಕ್ಕದ್ದು. ಠೇವಣಿ ಹಣಕ್ಕೆ ಬಡ್ಡಿಯನ್ನು ಕೊಡಲಾಗುವುದಿಲ್ಲ. ಠೇವಣಿ ಹಣವಿಲ್ಲದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ, ಠೇವಣಿ ಇಲ್ಲದೆ ಸಲ್ಲಿಸಲಾದ ಟೆಂಡರನ್ನು ತಿರಸ್ಕರಿಸಲಾಗುವುದು.

3) ಟೆಂಡರ್ ಫಾರಂನಲ್ಲಿ ನಮೂದಿಸಲಾದ ಅತೀ ಹೆಚ್ಚಿನ ದರವನ್ನು ಅಂಕಿ ಮತ್ತು ಅಕ್ಷರಗಳೆರಡರಲ್ಲಿಯೂ ಬರೆದಿರಬೇಕು. ಟೆಂಡರ್ ಫಾರಂನಲ್ಲಿ ದರವನ್ನು ಬರೆಯುವಾಗ ಅಥವಾ ಬೇರೆ ಏನಾದರೂ ಬರೆಯುವಾಗ ಏನಾದರೂ ತಿದ್ದುಪಡಿ ಮಾಡಿದ್ದರೆ ಆ ಸ್ಥಳದಲ್ಲಿ ಟೆಂಡರುದಾರರು ತಮ್ಮ ಪೂರ್ಣ ಸಹಿ ಮಾಡತಕ್ಕದ್ದು.

4) ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡುವಂತಿಲ್ಲ.

5) ದಿನಾಂಕ: 03-6-2004 ರಂದು ಪೂರ್ವಾಹ್ನ 11-00 ಘಂಟೆಗೆ ಬಹಿರಂಗ ಹರಾಜು ಮಾಡಲಾಗುವುದು. ಟೆಂಡರ್ ಸಲ್ಲಿಸಿದವರು ಬಹಿರಂಗ ಹರಾಜಿನಲ್ಲಿಯೂ ಸಹ ಭಾಗವಹಿಸಬಹುದು. ಸವಾಲುದಾರರು ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ರೂ.5000-00ಗಳ ಠೇವಣಿಯನ್ನು ಸ್ಥಳದಲ್ಲೇ ಪಾವತಿ ಮಾಡಬೇಕು. ಟೆಂಡರುದಾರರು ಹರಾಜಿನಲ್ಲಿ ಭಾಗವಹಿಸಬೇಕಾದಲ್ಲಿ ರೂ. 3000.00 ಗಳ ಠೇವಣಿಯನ್ನು ಸ್ಥಳದಲ್ಲಿಯೇ ಪಾವತಿಸಿ ಒಟ್ಟು ಠೇವಣಿ ಹಣ ರೂ. 5000.00 ಆಗುವಂತೆ ನೋಡಿಕೊಳ್ಳತಕ್ಕದ್ದು.

6) ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜು ನಡೆಸುವರು ಠೇವಣಿಯನ್ನು ತುಂಬಿದ ಟೆಂಡರುದಾರರು ಅಥವಾ ಸವಾಲುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ.

7) ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆ (ದರವನ್ನು) ದಾಖಲೆಗೊಳಿಸಿದ ನಂತರ ಸ್ವೀಕೃತವಾದ ಟೆಂಡರುಗಳನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಟೆಂಡರುದಾರರು ಹಾಗೂ ಸವಾಲುದಾರರ ಸಮಕ್ಷಮ ತೆಗೆದು ಬಹಿರಂಗಪಡಿಸುವರು. ಈ ಎರಡರಲ್ಲಿ ಅತೀ ಹೆಚ್ಚಿನ ದರವನ್ನು ಯಾರು ನಮೂದಿಸಿರುವರೋ ಅವರನ್ನು ಯಶಸ್ವಿ ಖರೀದಿದಾರರೆಂದು ಪರಿಗಣಿಸಲಾಗುವುದು. ಮೊಟ್ಟ ಮೊದಲು ಬಹಿರಂಗ ಹರಾಜು ನಡೆಸಲಾಗುವುದು. ನಂತರ ಟೆಂಡರುಗಳನ್ನು ಪರಿಗಣಿಸಲಾಗುವುದು.

8) ಯಶಸ್ವಿಯಾದ ಟೆಂಡರುದಾರ:ಸವಾಲುದಾರ ಉಳಿದ ಹಣವನ್ನು ಮೂರು ದಿನಗಳಲ್ಲಿ ಸಂಪೂರ್ಣ ಪಾವತಿ ಮಾಡಿ, ತಮ್ಮ ಸ್ವಂತ ಖರ್ಚಿನಿಂದ ವಾಹನವನ್ನು ತೆಗೆದುಕೊಂಡು ಹೋಗಬೇಕಾಗುತ್ತದೆ. ತಪ್ಪಿದ್ದಲ್ಲಿ ಇವರು ತುಂಬಿದ ಶೇಕಡಾ 25 ರಷ್ಟು ಹಣವನ್ನು ಮತ್ತು ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆ ಹೊರಡಿಸಲಾಗುವುದು.

9) ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್‌ದಾರ ಹಾಗೂ ಸವಾಲುದಾರರಿಗೆ ಠೇವಣಿ ಹಣವನ್ನು ಕೂಡಲೇ ಸ್ಥಳದಲ್ಲಿಯೇ ಹಿಂತಿರುಗಿಸಲಾಗುವುದು.

10) ಮಾರಾಟ ತೆರಿಗೆಯನ್ನು ಹಾಗೂ ಇತರೆ ತೆರಿಗೆಯನ್ನು ಅಸಂಬಂಧ ಚಾಲ್ತಿಯಲ್ಲಿರುವ ಅದರ ನಿಯಮಗಳನುಸಾರ ಸವಾಲಿನ ಹಣದ ಜೊತೆಗೆ ವಸೂಲಿ ಮಾಡಲಾಗುವುದು.

11) ಹರಾಜಿನ ವಿಷಯದಲ್ಲಿ ಏನಾದರೂ ತಕರಾರು ಬಂದಲ್ಲಿ "ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು" ಇವರು ಕೈಗೊಳ್ಳುವ ನಿರ್ಣಯವೇ ಅಂತಿಮವಾಗಿರುತ್ತದೆ.

12) ಹರಾಜಿನಲ್ಲಿ ಯಾವುದೇ ಸವಾಲನ್ನು ಅಥವಾ ಯಾವುದೇ ಕಾರಣಕ್ಕಾಗಿ ಟೆಂಡರನ್ನು ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರು ಹೊಂದಿರುತ್ತಾರೆ. ಇದರ ಮೇಲೆ ಯಾರ ಅಧಿಕಾರವು ಇರುವುದಿಲ್ಲ. ಈ ಸಂಬಂಧ ಇವರ ನಿರ್ಣಯವೇ ಅಂತಿಮವಾದದ್ದು.

13) ಮಾರಾಟಕ್ಕಿರುವ ಸದರಿ ವಾಹನವನ್ನು ಕಛೇರಿಯ ವೇಳೆಯಲ್ಲಿ ನ್ಯಾಯಾಲಯದ ಆವರಣದಲ್ಲಿ ನೋಡಬಹುದು.

14) ವಾಹನವನ್ನು ಸವಾಲುದಾರರಿಗೆ ಕೊಟ್ಟ ನಂತರ ಆ ವಾಹನದ ಸಂಪೂರ್ಣ ಜವಾಬ್ದಾರಿ ಅವರದೇ ಆಗಿರುತ್ತದೆ. ಆ ವಾಹನಕ್ಕೆ ಆಗುವ ಹಾನಿ, ಅಪಘಾತ ಇತ್ಯಾದಿಗಳಿಗೆ ಅವರೇ ಹೊಣೆಗಾರರಾಗುತ್ತಾರೆ.

**ಅರಳಿ ನಾಗರಾಜ**

ಪಿ.ಆರ್. 167 ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು-04

## ಪಾಲಿ ಬ್ಯಾಗ್ / ಪಾಲಿ ವೂವನ್ ಸ್ಯಾಕ್ ಬ್ಯಾಗ್‌ಗಳ ಸರಬರಾಜಿಗಾಗಿ ಟೆಂಡರ್

**ಸಂ:ತೋಇ:ಅಭಿವಿ:ಸತೋಅ1:70:2003-2004, ದಿನಾಂಕ: 6ನೇ ಏಪ್ರಿಲ್ 2004**

2004-2005ನೇ ಸಾಲಿಗೆ ತೋಟಗಾರಿಕೆ ಇಲಾಖೆಗೆ **ಪಾಲಿಬ್ಯಾಗ್ / ಪಾಲಿ ವೂವನ್ ಸ್ಯಾಕ್ ಬ್ಯಾಗ್‌ಗಳನ್ನು** ಸರಬರಾಜು ಮಾಡಲು ನೈಜ ಸರಬರಾಜುದಾರರಿಂದ ಟೆಂಡರ್ ಆಹ್ವಾನಿಸಲಾಗಿದೆ. ನಿಗದಿತ ಟೆಂಡರ್ ನಮೂನೆಯನ್ನು ತೋಟಗಾರಿಕೆ ಜಂಟಿ ನಿರ್ದೇಶಕರು (ಅಭಿವೃದ್ಧಿ) ಲಾಲ್‌ಬಾಗ್, ಬೆಂಗಳೂರು ರವರ ಕಛೇರಿಯಲ್ಲಿ ರೂ. 100/- ಗಳನ್ನು ನಗದಾಗಿ ನೀಡಿ ಪಡೆಯಬಹುದು. ನಿಗದಿತ ಟೆಂಡರ್ ನಮೂನೆಯನ್ನು ನಿರ್ದೇಶನಾಲಯದಿಂದ ಪಡೆಯಲು ಕೊನೆಯ ದಿನಾಂಕ: 28-4-2004, ವೇಳೆ ಸಂಜೆ 5.00 ಘಂಟೆ, ಮೊಹರಾದ ಲಕೋಟೆಯನ್ನು ಪಡೆಯಲು ಕೊನೆಯ ದಿನಾಂಕ: 29-4-2004, ವೇಳೆ ಸಂಜೆ 5.00ಘಂಟೆ, ಟೆಂಡರ್‌ದಾರರು ನಿಗದಿತ ನಮೂನೆಯ ಜೊತೆ ರೂ. 50,000/- ಗಳ ಮೊತ್ತದ ಭದ್ರತಾ ಠೇವಣಿಯನ್ನು ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಲಾಲ್‌ಬಾಗ್, ಬೆಂಗಳೂರು-560 004 ರವರ ಹೆಸರಿನಲ್ಲಿ ಪಡೆದು ಲಗತ್ತಿಸಿ ಸಲ್ಲಿಸಬೇಕು. ಮೊಹರಾದ ಟೆಂಡರ್‌ಗಳನ್ನು ದಿನಾಂಕ: 30-4-2004, ರಂದು ಬೆಳಿಗ್ಗೆ 11.00 ಘಂಟೆಗೆ ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರಿನಲ್ಲಿ ತೆರೆಯಲಾಗುವುದು. ಹೆಚ್ಚಿನ ವಿವರಗಳಿಗೆ ತೋಟಗಾರಿಕೆ ಜಂಟಿ ನಿರ್ದೇಶಕರು (ಅಭಿವೃದ್ಧಿ) ಲಾಲ್‌ಬಾಗ್, ಬೆಂಗಳೂರು ರವರನ್ನು ಸಂಪರ್ಕಿಸುವುದು. (ದೂರವಾಣಿ: 26576950)

ಪಿ.ಆರ್. 168 ತೋಟಗಾರಿಕೆ ನಿರ್ದೇಶಕರು, ಬೆಂಗಳೂರು

## ತೋಟಗಾರಿಕೆ ಇಲಾಖೆ

### ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು-04

### ಮಾವಿನ ಓಟೆಗಳ ಸರಬರಾಜಿಗಾಗಿ ಟೆಂಡರ್ ಪ್ರಕಟಣೆ

**ಸಂ:ತೋಇ:ಅಭಿವಿ:ಸತೋಅ1:68:2003-2004, ದಿನಾಂಕ: 6ನೇ ಏಪ್ರಿಲ್ 2004**

2004-2005ನೇ ಸಾಲಿಗೆ ತೋಟಗಾರಿಕೆ ಇಲಾಖೆಗೆ ಮಾವಿನ ಓಟೆಗಳನ್ನು ಸರಬರಾಜು ಮಾಡಲು ನೈಜ ನರ್ಸರಿದಾರರಿಂದ ಟೆಂಡರ್ ಆಹ್ವಾನಿಸಲಾಗಿದೆ. ನಿಗದಿತ ಟೆಂಡರ್ ನಮೂನೆಯನ್ನು ತೋಟಗಾರಿಕೆ ಜಂಟಿ ನಿರ್ದೇಶಕರು (ಅಭಿವೃದ್ಧಿ) ಲಾಲ್‌ಬಾಗ್, ಬೆಂಗಳೂರು ರವರ ಕಛೇರಿಯಲ್ಲಿ ರೂ. 100/- ಗಳನ್ನು ನಗದಾಗಿ ನೀಡಿ ಪಡೆಯಬಹುದು. ನಿಗದಿತ ಟೆಂಡರ್ ನಮೂನೆಯನ್ನು ನಿರ್ದೇಶನಾಲಯದಿಂದ ಪಡೆಯಲು ಕೊನೆಯ ದಿನಾಂಕ: 20-4-2004, ವೇಳೆ ಸಂಜೆ 5.00 ಘಂಟೆ, ಮೊಹರಾದ ಲಕೋಟೆಯನ್ನು ಪಡೆಯಲು ಕೊನೆಯ ದಿನಾಂಕ: 21-4-2004, ವೇಳೆ ಮಧ್ಯಾಹ್ನ 12.30ಘಂಟೆ, ಟೆಂಡರ್‌ದಾರರು ನಿಗದಿತ ನಮೂನೆಯ ಜೊತೆ ರೂ. 25,000/- ಗಳ ಮೊತ್ತದ ಭದ್ರತಾ ಠೇವಣಿಯನ್ನು ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಲಾಲ್‌ಬಾಗ್, ಬೆಂಗಳೂರು-560 004 ರವರ ಹೆಸರಿನಲ್ಲಿ ಪಡೆದು ಲಗತ್ತಿಸಿ ಸಲ್ಲಿಸಬೇಕು. ಮೊಹರಾದ ಟೆಂಡರ್‌ಗಳನ್ನು ದಿನಾಂಕ: 21-4-2004, ರಂದು ಮಧ್ಯಾಹ್ನ 3.00 ಘಂಟೆಗೆ ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರಿನಲ್ಲಿ ತೆರೆಯಲಾಗುವುದು. ಹೆಚ್ಚಿನ ವಿವರಗಳಿಗೆ ತೋಟಗಾರಿಕೆ ಜಂಟಿ ನಿರ್ದೇಶಕರು (ಅಭಿವೃದ್ಧಿ) ಲಾಲ್‌ಬಾಗ್, ಬೆಂಗಳೂರು ರವರನ್ನು ಸಂಪರ್ಕಿಸುವುದು. (ದೂರವಾಣಿ: 26576950)

ಪಿ.ಆರ್. 169 ತೋಟಗಾರಿಕೆ ನಿರ್ದೇಶಕರು, ಬೆಂಗಳೂರು

## ಕೃಷಿ ಇಲಾಖೆ

### ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು

### ಟೆಂಡರ್ ಪ್ರಕಟಣೆ

**ಸಂಖ್ಯೆ:ಕ್ಷೇಪ್ರ/ಕೃಯಾಂ/ಆರ್‌ಸಿ/3/2004-05, ದಿನಾಂಕ: 16ನೇ ಮಾರ್ಚ್ 2004**

**ವಿಷಯ:** 2004-05ನೇ ಸಾಲಿನಲ್ಲಿ ಕೃಷಿ ಇಲಾಖೆಯ ವಿವಿಧ ಕಾರ್ಯಕ್ರಮಗಳಡಿ ಕೃಷಿ ಯಂತ್ರೋಪಕರಣ, ಭಾರತ ಸರ್ಕಾರ ಅನುಮೋದಿತ ಪವರ್ ಟಿಲ್ಲರ್‌ಗಳು ಹಾಗೂ ಸಣ್ಣ ನೀರಾವರಿ ಘಟಕಗಳನ್ನು ಸರಬರಾಜು ಮಾಡಲು ಟೆಂಡರು ದರ ನಿಗದಿಪಡಿಸುವ ಬಗ್ಗೆ.

2004-05ನೇ ಸಾಲಿನಲ್ಲಿ ಕೃಷಿ ಇಲಾಖೆಯ ವಿವಿಧ ಯೋಜನೆಗಳಡಿಯಲ್ಲಿ ರಿಯಾಯಿತಿ ದರದಲ್ಲಿ ಹೈಟೆಕ್ ಕೃಷಿ ಯಂತ್ರೋಪಕರಣಗಳು, ಪವರ್ ಟಿಲ್ಲರ್‌ಗಳು, ರೇನ್‌ಗನ್‌ಗಳು, ತುಂತುರು ನೀರಾವರಿ ಮತ್ತು ಹನಿ ನೀರಾವರಿ ಘಟಕಗಳನ್ನು ರಿಯಾಯಿತಿ ದರದಲ್ಲಿ ರೈತರಿಗೆ ವಿತರಿಸಲು ಕಾರ್ಯಕ್ರಮಗಳನ್ನು ಹಮ್ಮಿಕ್ಕೊಳ್ಳಲಾಗಿದೆ. ಕಾರಣ, ಉತ್ಪಾದಕರಿಂದ ಮತ್ತು ರಾಜ್ಯ ಮಟ್ಟದ ಅಧಿಕೃತ ಹಾಗೂ ಪ್ರಾಂತೀಯ ವಿತರಕರಿಂದ ದರ ಕರಾರಿನಡಿ ಸರಬರಾಜು ಮಾಡಲು, ಯಂತ್ರ ಚಾಲಿತ ಹೈಟೆಕ್ ಕೃಷಿ ಉಪಕರಣಗಳು ಅಂದರೆ ಮಲ್ಟಿಕ್ರಾಪ್ ಥ್ರೆಶರ್, ರೋಟಾವೇಟರ್, ಭತ್ತದ ಪ್ಲಾಂಟರ್, ಕಬ್ಬಿನ ಪ್ಲಾಂಟರ್, ಟ್ರ್ಯಾಕ್ಟರ್ ಚಾಲಿತ ರಾಗಿ ಮತ್ತು ಭತ್ತದ ಕಟಾವು ಯಂತ್ರ, ಕಾಳು ತೂರುವ ಯಂತ್ರ, ಟ್ರ್ಯಾಕ್ಟರ್ ಚಾಲಿತ/ಯಂತ್ರಚಾಲಿತ ರೀಪರ್, ಟ್ರ್ಯಾಕ್ಟರ್ ಚಾಲಿತ ಫರೋ ಓಪನರ್, ಟ್ರ್ಯಾಕ್ಟರ್ ಚಾಲಿತ ಮೌಲ್ಡ್ ಪ್ಲೋ, ಟ್ರ್ಯಾಕ್ಟರ್ ಚಾಲಿತ ಡ್ರಿಲ್, ರೇಸ್ಡ್ ಬೆಡ್ ಪ್ಲಾಂಟರ್, ಗ್ರೌಂಡ್ ನಟ್ ಡಿಗ್ಗರ್, ಪವರ್ ವೀಡರ್, ಮುಸುಕಿನ ಜೋಳ ಶೆಲ್ಲರ್-ಪವರ್ ಆಪರೇಟೆಡ್, ಪವರ್ ಪ್ಲೋ, ಮಲ್ಟಿ ಪರ್ಪಸ್ ಟಿಲ್ಲರ್, ಟ್ರ್ಯಾಕ್ಟರ್ ಚಾಲಿತ ವಿವಿಧೋದ್ದೇಶದ ಆಳದ ಟ್ರೆಂಚರ್ ಇತ್ಯಾದಿ. ಪವರ್ ಟಿಲ್ಲರ್‌ಗಳು (ಭಾರತ ಸರ್ಕಾರದಿಂದ ನಮೂದಿಸಿರುವ ಕಂಪನಿಗಳ ಮಾಡಲ್‌ಗಳು) ತುಂತುರು ನೀರಾವರಿ ಘಟಕಗಳು, ಹನಿ ನೀರಾವರಿ ಘಟಕಗಳು ಮತ್ತು ರೇನ್‌ಗನ್ ಮುಂತಾದವುಗಳಿಗಾಗಿ ದರ ಕರಾರಿನಡಿ ಸರಬರಾಜು ಮಾಡಲು ಮೊಹರಾದ ಟೆಂಡರ್‌ಗಳನ್ನು ಕರೆಯಲಾಗಿದೆ.

ಮೇಲೆ ಸೂಚಿಸಿರುವ ವಿವಿಧ ಉಪಕರಣಗಳಿಗೆ ಖಾಲಿ ಫಾರಂಗಳನ್ನು (1) ಶೆಡ್ಯೂಲ್-I ಭಾರತ ಸರ್ಕಾರ ಅನುಮೋದಿತ ಪವರ್‌ಟಿಲ್ಲರ್‌ಗಳು, (2) ಶೆಡ್ಯೂಲ್-II ಬಿ ಐ ಎಸ್ ಗುರುತಿನ ತುಂತುರು ನೀರಾವರಿ ಘಟಕಗಳು, (3) ಶೆಡ್ಯೂಲ್-III ಬಿ ಐ ಎಸ್ ಗುರುತಿನ ಹನಿ ನೀರಾವರಿ ಘಟಕಗಳು (4) ಶೆಡ್ಯೂಲ್-IV ಬಿ ಐ ಎಸ್ ಗುರುತಿನ ಪೈಪ್‌ನೊಂದಿಗೆ ರೇನ್‌ಗನ್ ನೀರಾವರಿ ಘಟಕಗಳು ಮತ್ತು (5) ಶೆಡ್ಯೂಲ್-V ಹೈಟೆಕ್ ಕೃಷಿ ಯಂತ್ರೋಪಕರಣಗಳಿಗಾಗಿ ಫಾರಂಗಳನ್ನು ಉಪ ಕೃಷಿ ನಿರ್ದೇಶಕರು (ಕ್ಷೇತ್ರ ಪ್ರಯೋಗ), ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು-1 ಇಲ್ಲಿ ಟೆಂಡರ್ ಅರ್ಜಿ ಶುಲ್ಕ ರೂ. 100.00 ಅನ್ನು ಕೃಷಿ ನಿರ್ದೇಶಕರು, ಬೆಂಗಳೂರು ಇವರ ಹೆಸರಿನಲ್ಲಿ ತೆರೆದ ಡಿ.ಡಿ. ರೂಪದಲ್ಲಾಗಲಿ ಅಥವಾ ಹಣ ಪಾವತಿ ಮಾಡಿ ಪಡೆಯಬಹುದಾಗಿದೆ. ಖಾಲಿ ಟೆಂಡರ್ ಫಾರಂ ಅನ್ನು ಅಂಚೆಯ ಮೂಲಕ ಪಡೆಯುವವರ ನೊಂದಣಿ ಅಂಚೆಯ ವೆಚ್ಚ ರೂ.25 ಗಳನ್ನು ಅರ್ಜಿಯ ಫಾರಂ ಶುಲ್ಕದೊಂದಿಗೆ ಹೆಚ್ಚುವರಿಯಾಗಿ ಡಿ.ಡಿ. ರೂಪದಲ್ಲಿ ಮಾತ್ರ ಕಳುಹಿಸುವುದು. ಅಂಚೆಯ ವಿಳಂಬಗಳಿಗೆ ಈ ಕಛೇರಿಯು ಜವಾಬ್ದಾರರಾಗಿರುವುದಿಲ್ಲ. ಖಾಲಿ ಟೆಂಡರ್ ಫಾರಂಗಳನ್ನು ದಿ: 12-4-2004ರಿಂದ 21-4-2004ರವರೆಗೆ ಕೆಲಸದ ದಿನಗಳಲ್ಲಿ ಬೆಳಗ್ಗೆ 10.30 ಗಂಟೆಯಿಂದ ಸಾಯಂಕಾಲ 5.30 ಗಂಟೆಯವರೆಗೆ ಪಡೆಯಬಹುದು.

ಮೊಹರಾದ ಟೆಂಡರ್‌ಗಳನ್ನು ಜಮಾ ಮಾಡಲು ದಿನಾಂಕ 21-4-2004 ಸಂಜೆ 5-30 ಗಂಟೆಗೆ ಕಡೆಯ ದಿನವಾಗಿರುವುದು. ಟೆಂಡರ್ ಫಾರಂಗಳಲ್ಲಿ ನಮೂದಿಸಿರುವ ಇಎಮ್‌ಡಿ ಮೊತ್ತವನ್ನು ಡಿ.ಡಿ. ರೂಪದಲ್ಲಿ ಅಥವಾ ಬ್ಯಾಂಕ್ ಗ್ಯಾರಂಟಿಯನ್ನು ಕೃಷಿ ನಿರ್ದೇಶಕರ

ಹೆಸರಿನಲ್ಲಿ ಸಲ್ಲಿಸುವುದು. ಟೆಂಡರು ಪರಿಶೀಲನಾ ಸಮಿತಿಯು ಕೃಷಿ ಆಯುಕ್ತರ ಕಾರ್ಯಾಲಯದ ಸಭಾಂಗಣದಲ್ಲಿ ದಿನಾಂಕ: 23-4-04ರಂದು ಬೆಳಗ್ಗೆ 11-00 ಗಂಟೆಗೆ ಬಿಡ್ಡುದಾರರ ಸಮ್ಮುಖದಲ್ಲಿ ಮೊಹರಾದ ಟೆಂಡರ್‌ಗಳ ತಾಂತ್ರಿಕ ಬಿಡ್ಡನ್ನು ತೆರೆಯಲು ಸೇರುವುದು.

ತಾಂತ್ರಿಕ ಬಿಡ್ಡುದಾರರಲ್ಲಿ ತೇರ್ಗಡೆಯಾದ ಸಂಸ್ಥೆಗಳ ವಾಣಿಜ್ಯ ಬಿಡ್ಡನ್ನು ಈ ಕೆಳಗೆ ನಮೂದಿಸಿದ ದಿನಾಂಕಗಳಂದು ತೆರೆಯಲಾಗುವುದು.

1) ಶೆಡ್ಯೂಲ್-I ಪವರ್‌ಟಿಲ್ಲರ್, ದಿನಾಂಕ 24-4-2004ರಂದು ಬೆಳಿಗ್ಗೆ 11-00 ಗಂಟೆಗೆ ತೆರೆಯಲಾಗುವುದು.

2) ಶೆಡ್ಯೂಲ್-II ತುಂತುರು ನೀರಾವರಿ ಘಟಕ ದಿನಾಂಕ 26-4-2004ರಂದು ಬೆಳಿಗ್ಗೆ 11-00 ಗಂಟೆಗೆ ತೆರೆಯಲಾಗುವುದು.

3) ಶೆಡ್ಯೂಲ್-III ಹನಿ ನೀರಾವರಿ ಘಟಕ ಮತ್ತು ಶೆಡ್ಯೂಲ್-IV ರೇನ್‌ಗನ್ ಘಟಕ ದಿನಾಂಕ 27-4-2004 ರಂದು ಬೆಳಿಗ್ಗೆ 11-00 ಗಂಟೆಗೆ ತೆರೆಯಲಾಗುವುದು.

4) ಶೆಡ್ಯೂಲ್-V ಹೈಟೆಕ್ ಕೃಷಿ ಯಂತ್ರೋಪಕರಣ ದಿನಾಂಕ 28-4-2004ರಂದು ಬೆಳಿಗ್ಗೆ 11-00 ಗಂಟೆಗೆ ತೆರೆಯಲಾಗುವುದು.

ಟೆಂಡರ್ ದಾಖಲಾತಿಯನ್ನು ಬೇರೆಯವರಿಗೆ ವರ್ಗಾಯಿಸಲು ಅವಕಾಶವಿರುವುದಿಲ್ಲ.

ಪಿ.ಆರ್. 170 ಕೃಷಿ ನಿರ್ದೇಶಕರು, ಬೆಂಗಳೂರು

**ಅರಣ್ಯ ಕೃಷಿಕರ ಕಛೇರಿ, ಕೇಂದ್ರ ವಲಯ ಅರಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ಬೆಂಗಳೂರು**

**ಮರು ಹರಾಜು ಪ್ರಕಟಣೆ**

**ಸಂಖ್ಯೆ: ಎ4-ಅಂಬಾಸಿಡರ್‌ಕಾರು-ವಾಹನಗಳು-ಹರಾಜು-2003-2004, ದಿನಾಂಕ: 29ನೇ ಮಾರ್ಚ್ 2004**

**ವಿಷಯ:** ಅಂಬಾಸಿಡರ್ ಕಾರು ಸಂಖ್ಯೆ: ಎಂ.ಇ.ಎ. 3982 ಕಾರಿನ ಬಗ್ಗೆ.

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ, ಈ ವಿಭಾಗಕ್ಕೆ ಸೇರಿದ ಸರ್ಕಾರಿ ವಾಹನ ಸಂಖ್ಯೆ: ಎಂ.ಇ.ಎ. 3982ನ್ನು ಹೇಗಿದೆಯೋ ಹಾಗೆ ಎಂಬ ಆಧಾರದ ಮೇಲೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರ ಸಮ್ಮುಖದಲ್ಲಿ ಈ ಕೆಳಗೆ ಸೂಚಿಸಿರುವ ಸ್ಥಳ ಮತ್ತು ದಿನಾಂಕದಂದು ಬೆಳಿಗ್ಗೆ 11.00 ಗಂಟೆಗೆ ಹರಾಜು ಮೂಲಕ ಮಾರಾಟ ಮಾಡಲಾಗುವುದು.

| ಕ್ರ. ಸಂ. | ವಾಹನದ ಸಂಖ್ಯೆ ಮತ್ತು ಹೆಸರು | ಹರಾಜು ದಿನಾಂಕ ಮತ್ತು ಸಮಯ | ಸ್ಥಳ |
|---|---|---|---|
| 1. | ಅಂಬಾಸಿಡರ್ ಕಾರು ಸಂಖ್ಯೆ ಎಂ.ಇ.ಎ. 3982 | 28-04-2004 ಬೆಳಿಗ್ಗೆ 11.00 ಗಂಟೆಗೆ | ಅರಣ್ಯ ಕೃಷಿಕರ ಕಛೇರಿ, ಕೇಂದ್ರ ವಲಯ, ಅರಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ಬೆಂಗಳೂರು - 560 076. |

ಒಂದು ವೇಳೆ ಅಂದು ಮಾರಾಟವಾಗದೆ ಇದ್ದ ಪಕ್ಷದಲ್ಲಿ ದಿನಾಂಕ:05-05-2004 ರಂದು ಇದೇ ಹರಾಜು ಪ್ರಕಟಣೆ ಆಧಾರದ ಮೇಲೆ ಅಂತಿಮವಾಗಿ ಹರಾಜು ಮೂಲಕ ಮಾರಾಟ ಮಾಡಲಾಗುವುದು.

**ಷರತ್ತುಗಳು**

1. ಹರಾಜಿನಲ್ಲಿ ಭಾಗವಹಿಸುವವರು ಹರಾಜಿಗೆ ಮುನ್ನ ರೂ. 5000.00 ಗಳ ನಗದನ್ನು ಇ.ಎಂ.ಡಿ. ಆಗಿ ಇಟ್ಟು ಭಾಗವಹಿಸಬಹುದು.
2. ಹರಾಜಿನಲ್ಲಿ ಭಾಗವಹಿಸುವವರು ಹರಾಜು ಪ್ರಾರಂಭವಾಗುವ ಮುನ್ನ ಕಛೇರಿಯ ವೇಳೆಯಲ್ಲಿ ವಾಹನಗಳನ್ನು ವೀಕ್ಷಿಸಿ ವಾಹನದ ಪರಿಸ್ಥಿತಿಯನ್ನು ಕುರಿತು ತಪಾಸಿಸಿಕೊಂಡು ಖಾತ್ರಿ ಮಾಡಿಕೊಳ್ಳುವುದು, ವಾಹನವು ಹೇಗಿದೆಯೋ ಹಾಗೆಯಿರುವ ಆಧಾರದ ಮೇಲೆ ಹರಾಜು ಮಾಡಲಾಗುವುದು.
3. ಈ ಹರಾಜಿನಲ್ಲಿ ಯಶಸ್ವಿಯಾದ ಬಿಡ್ಡುದಾರರು ಹರಾಜು ಮುಗಿದ ತಕ್ಷಣ ಹರಾಜಿನ ಮೊತ್ತದ ನಾಲ್ಕನೇ ಒಂದು ಭಾಗ ಹಣವನ್ನು ಮತ್ತು ಪೂರ್ಣ ತೆರಿಗೆಯನ್ನು ಕೂಡಲೇ ಪಾವತಿಸತಕ್ಕದ್ದು. ತಪ್ಪಿದಲ್ಲಿ ಅವರು ಪಾವತಿಸಿದ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮೂಲ ಬಿಡ್ಡುದಾರರ ಸ್ವಂತ ಜವಾಬ್ದಾರಿಯ ಮೇಲೆ ಮರು ಹರಾಜು ಮಾಡಲಾಗುವುದು. ತಪ್ಪಿತಸ್ಥರು ಮರು ಹರಾಜಿನಲ್ಲಿ ಆದಂತಹ ನಷ್ಟವನ್ನು ತುಂಬಿಕೊಡಲು ಜವಾಬ್ದಾರರಾಗಿರುತ್ತಾರೆ. ಅಧಿನಿಯಮ 107ರ ಪ್ರಕಾರ ಕಂದಾಯ ಬಾಕಿ ಎಂದು ವಸೂಲಿ ಮಾಡಲಾಗುವುದು.
4. ಸಂಬಂಧಿಸಿದ ಅಧಿಕಾರಿಗಳಿಂದ ಬಿಡ್ಡು ಅಂಗೀಕಾರವಾಗಿ ಯಶಸ್ವಿ ಬಿಡ್ಡುದಾರರ ಹೆಸರಿಗೆ ನೋಂದಣಿ ಅಂಚೆ ಮುಖಾಂತರ ತಿಳಿಸಲಾಗುವುದು. ಈ ತಿಳುವಳಿಕೆಯನ್ನು ಹರಾಜು ನಡೆದ ದಿನದಿಂದ 60 ದಿನಗಳೊಳಗೆ ಯಶಸ್ವಿ ಬಿಡ್ಡುದಾರರು ಉಳಿದ ಮುಕ್ಕಾಲು ಭಾಗ ಹರಾಜಿನ ಮೊತ್ತದ ಹಣವನ್ನು "ಸ್ವೀಕೃತಿ ಆಜ್ಞೆ"ಯ ಪ್ರತಿ ತಲುಪಿದ 15 (ಹದಿನೈದು) ದಿನಗಳೊಳಗೆ ಕಟ್ಟಿ ವಾಹನವನ್ನು ಬಿಡಿಸಿಕೊಳ್ಳುವುದು. ತಪ್ಪಿದ್ದಲ್ಲಿ ಷರತ್ತು ಸಂಖ್ಯೆ: (3)ರ ಪ್ರಕಾರ ಕ್ರಮ ತೆಗೆದುಕೊಳ್ಳಲಾಗುವುದು.
5. ಹರಾಜನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರಿಗೆ ಸೇರಿರುತ್ತದೆ. ಯಾವುದೇ ಕಾರಣವನ್ನು ನೀಡದೆ ಸಂಬಂಧಿಸಿದ ಅಧಿಕಾರಿಯು ಹರಾಜನ್ನು ತಿರಸ್ಕರಿಸಬಹುದಾಗಿದೆ.
6. ಹರಾಜನ್ನು ದಿನಾಂಕ 28-04-2004ರಂದು ಬೆಳಿಗ್ಗೆ 11.00 ಗಂಟೆಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಅರಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ಬೆಂಗಳೂರು-560 076 ಇವರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳು ನಡೆಸುವರು. ಅಂದು ಹರಾಜು ಆಗದಿದ್ದಲ್ಲಿ ದಿ.05-05-2004 ರಂದು ಇದೇ ಹರಾಜು ಪ್ರಕಟಣೆ ಆಧಾರದ ಮೇಲೆ ಅಂತಿಮವಾಗಿ ಹರಾಜು ಮೂಲಕ ಮಾರಾಟ ಮಾಡಲಾಗುವುದು.

7. ವಾಹನದ ಮಾಲಿಕತ್ವವನ್ನು ಬದಲಾಯಿಸಿಕೊಳ್ಳುವ ಹೊಣೆಯು ಯಶಸ್ವಿ ಬಿಡ್ಡುದಾರರದಾಗಿರುತ್ತದೆ. ಆದಾಗ್ಯೂ ಈ ವಿಚಾರದಲ್ಲಿ ಅವಶ್ಯವಿರುವ ಇಲಾಖೆಯ ಸಹಕಾರವನ್ನು ನೀಡಲಾಗುವುದು.
8. ಒಂದು ವೇಳೆ ಹರಾಜಿನಲ್ಲಿ ದೋಣ್‌ವಾರು ಆದರೂ ಸಹಾ ಹರಾಜಿನ ಪೂರ್ಣ ಹಣವನ್ನು ಇತರೆ ತೆರಿಗೆಗಳೊಂದಿಗೆ ಹರಾಜು ದಿನವೇ ಪಾವತಿಸಬೇಕು.

ಪಿ.ಆರ್. 171 ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು.

**ನಿರ್ದೇಶನಾಲಯ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೆಂಗಳೂರು-1**

**ಅಧಿಸೂಚನೆ ಸಂಖ್ಯೆ:ಸಿಶಾ:ಬ್ಯಾಲಾ:ನೇ:2841:2003-04, ದಿನಾಂಕ: 31ನೇ ಮಾರ್ಚ್ 2004**

**ವಿಷಯ:** ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯಲ್ಲಿ ಗ್ರೂಪ್ 'ಡಿ' ವೃಂದದಲ್ಲಿ ನೇರನೇಮಕಾತಿ ಒಂದು ಅನುಚರರ ಬ್ಯಾಕ್‌ಲಾಗ್ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ಅಭ್ಯರ್ಥಿಗಳ ಸಂಭವನೀಯ ಪಟ್ಟಿ ಪ್ರಕಟಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ.ಡಿಪಿಎಆರ್.13.ಎಸ್‌ಬಿಸಿ.2001, ದಿನಾಂಕ: 21-11-2001.
2. ಈ ಕಛೇರಿ ಅಧಿಸೂಚನೆ ಸಂಖ್ಯೆ.ವಿನಿ:ಸಿಶಾ:ಬ್ಯಾಲಾ:440:2003-04, ದಿನಾಂಕ 6-6-2003. (ಗೆಜೆಟ್ ಪ್ರಕಟಣಾ ದಿನಾಂಕ 19-6-2003).

ಈ ಇಲಾಖೆಯ ಗ್ರೂಪ್ 'ಡಿ' ವೃಂದದಲ್ಲಿ ಒಂದು ಅನುಚರರನ್ನು ಪರಿಶಿಷ್ಟ ಜಾತಿಗೆ ಸಂಬಂಧಪಟ್ಟ ಬ್ಯಾಕ್‌ಲಾಗ್ ಹುದ್ದೆಯನ್ನು ಭರ್ತಿ ಮಾಡುವ ಸಂಬಂಧ ಉಲ್ಲೇಖ (2)ರ ಅಧಿಸೂಚನೆಯನ್ನು ದಿನಾಂಕ 19-6-2003ರ ಗೆಜೆಟ್‌ನಲ್ಲಿ ಪ್ರಕಟಿಸಿ ಅರ್ಹ ಪರಿಶಿಷ್ಟ ಜಾತಿ ಅಭ್ಯರ್ಥಿಗಳಿಂದ ಅರ್ಜಿ ಆಹ್ವಾನಿಸಲಾಗಿತ್ತು.

ಅದರಂತೆ ಸ್ವೀಕರಿಸಲಾಗಿರುವ ಅರ್ಜಿಗಳನ್ನು ಉಲ್ಲೇಖ (1)ರ ಅಧಿಸೂಚನೆಯನ್ವಯ, 29 ವರ್ಷದಿಂದ 40 ವರ್ಷದೊಳಗಿನ ವಯೋಮಿತಿಯಲ್ಲಿರುವ ಅಭ್ಯರ್ಥಿಗಳಿಗೆ ಮೊದಲ ಆದ್ಯತೆಯನ್ನು ನೀಡಿ ಉಲ್ಲೇಖ (2)ರ ಅಧಿಸೂಚನೆಯಂತೆ ಈ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮದ ಪ್ರಕಾರ ಅನುಚರರ ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯಾದ 7ನೇ ತರಗತಿ ಉತ್ತೀರ್ಣತೆಯನ್ನು ಪರಿಗಣಿಸಿ ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿ ಹಾಗೂ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ನೇಮಕಾತಿ ಷರತ್ತುಗಳನ್ನು ಪೂರೈಸಿದ ಅರ್ಹ ಅಭ್ಯರ್ಥಿಗಳ ಗರಿಷ್ಠ ಶೇಕಡಾವಾರು ಅಂಕಗಳ ಆಧಾರಿತ (Cut off percentage) ಸಂಭವನೀಯ ಪಟ್ಟಿಯನ್ನು (provisional list) ಸಿದ್ಧಪಡಿಸಿದ್ದು, ನಿರ್ದೇಶನಾಲಯ, 17ನೇ ಮಹಡಿ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ವಿಶ್ವೇಶ್ವರಯ್ಯ ಮುಖ್ಯ ಗೋಪುರ, ಡಾ. ಅಂಬೇಡ್ಕರ್ ರಸ್ತೆ, ಬೆಂಗಳೂರು-1, ಇಲ್ಲಿ ಮಾಹಿತಿಗಾಗಿ ಪ್ರಕಟಿಸಲಾಗಿದೆ.

ಸಂಭವನೀಯ ಪಟ್ಟಿಯಲ್ಲಿ ಗುಂಪುವಾರು ಶೇಕಡಾವಾರು ಅಂಕಗಳಿಗಿಂತ ಹೆಚ್ಚಿನ ಅಂಕಗಳನ್ನು ಗಳಿಸಿದ್ದು ಪ್ರಕಟಿಸಲಾಗಿರುವ ಸಂಭವನೀಯ ಅರ್ಹತಾ ಪಟ್ಟಿಯಲ್ಲಿ ಹೆಸರು ಸೇರ್ಪಡೆಯಾಗದೇ ಇರುವ ಅಭ್ಯರ್ಥಿಗಳು ತಮ್ಮ ಆಕ್ಷೇಪಣೆಗಳನ್ನು ಸಂಬಂಧಪಟ್ಟ ಎಲ್ಲಾ ದಾಖಲಾತಿಗಳ ಜೆರಾಕ್ಸ್ ಪ್ರತಿಗಳೊಂದಿಗೆ ದಿನಾಂಕ 1-5-2004 ರೊಳಗೆ ನಿರ್ದೇಶಕರು, 17ನೇ ಮಹಡಿ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ವಿಶ್ವೇಶ್ವರಯ್ಯ ಗೋಪುರ, ಬೆಂಗಳೂರು-1, ಇವರಿಗೆ ಖುದ್ದಾಗಿ ಇಲ್ಲವೇ ನೋಂದಾಯಿತ ಅಂಚೆ ಮೂಲಕ ಸಲ್ಲಿಸತಕ್ಕದ್ದು. ನಿಗದಿತ ದಿನಾಂಕದ ನಂತರ ಬರುವ ಯಾವುದೇ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

ಈ ಸಂಭವನೀಯ ಪಟ್ಟಿಯು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿದೆ.

1. ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ಒಳಪಡಿಸಲಾಗುವುದು.
2. ಮೀಸಲಾತಿ ನಿಯಮಾನುಸಾರ ಆಯ್ಕೆಯಾದ ಅಭ್ಯರ್ಥಿಗಳ ಜಾತಿ ಪ್ರಮಾಣ ಪತ್ರವನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳಲ್ಲಿ ಪರಿಶೀಲನೆಗೆ ಒಳಪಡಿಸಿ ಸಿಂಧುತ್ವ ಪಡೆಯಲಾಗುವುದು.
3. ಅಭ್ಯರ್ಥಿಗಳ ವಿರುದ್ಧ ಯಾವುದೇ ಮೊಕದ್ದಮೆ ಇರುವುದಿಲ್ಲವೆಂಬ ಬಗ್ಗೆ ಪೊಲೀಸ್ ವರದಿ ಅವಶ್ಯ.
4. ದೇಹದಾರ್ಢ್ಯತೆ ಬಗ್ಗೆ ಜಿಲ್ಲಾ ಸರ್ಜನ್‌ರವರಿಂದ ಪ್ರಮಾಣ ಪತ್ರ ಒದಗಿಸತಕ್ಕದ್ದು.

ನಿರ್ದೇಶಕರು, ವಿಮಾ ಇಲಾಖೆ.

**ಅನುಚರರ ಪರಿಶಿಷ್ಟ ಜಾತಿ ಬ್ಯಾಕ್‌ಲಾಗ್ ಹುದ್ದೆಯ ಸಂಭವನೀಯ ಆಯ್ಕೆ ಪಟ್ಟಿ.**

| ಹುದ್ದೆಗಳ ವಿವರ | ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ವಿದ್ಯಾರ್ಹತೆ | ವಿದ್ಯಾರ್ಹತೆ ಶೇಕಡ ಪ್ರಮಾಣ | ಷರಾ |
|---|---|---|---|---|---|---|
| ಅನುಚರರು ವೇತನ ಶ್ರೇಣಿ ರೂ. 2600-4350 | 1 | ಗಂಗಾಧರ ಕಲ್ಲಪ್ಪಾ ಘಸ್ತಿ, ಸಾರಾಪುರ ಅಂಚೆ, ಹುಕ್ಕೇರಿ ತಾಲ್ಲೂಕು, ಬೆಳಗಾಂ-591309 | 24-7-1966 | 7ನೇ ತರಗತಿ | 92.83 | |
| **ಹೆಚ್ಚುವರಿ ಪಟ್ಟಿ** | | | | | | |
| ಅನುಚರರು ವೇತನ ಶ್ರೇಣಿ ರೂ. 2600-4350 | 1 | ರಾಚಯ್ಯ, ನಂಜಯ್ಯನವರ ಮಗ, ಮಾದಾಪುರ, ಟಿ. ನರಸೀಪುರ ತಾಲ್ಲೂಕು, ಮೈಸೂರು-571124. | 20-7-1971 | 7ನೇ ತರಗತಿ | 91.64 | |

ಪಿ.ಆರ್. 173 ನಿರ್ದೇಶಕರು, ವಿಮಾ ಇಲಾಖೆ.

**ಆಯುಕ್ತರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ಕರ್ನಾಟಕ ಗೃಹ ಮಂಡಳಿ ಕಟ್ಟಡ, 7ನೇ ಮಹಡಿ, ಕಾವೇರಿ ಭವನ, ಕೆ.ಜಿ. ರಸ್ತೆ, ಬೆಂಗಳೂರು-9**

**"ಮರು ಟೆಂಡರ್ ಕಂ-ಬಹಿರಂಗ ಹರಾಜು ಪ್ರಕಟಣೆ"**

**ಸಂಖ್ಯೆ/ಜಅಇ/ಆಡಳಿತ/ವಿನಿ-5/ವಿವ-42/2003-04**

**ವಿಷಯ:** ಜಲಾನಯನ ಅಭಿವೃದ್ಧಿ ಇಲಾಖೆಯ ಹಳೆಯ ವಾಹನಗಳನ್ನು (ಅಂಬಾಸಿಡರ್ ಕಾರುಗಳು) ಟೆಂಡರ್-ಕಂ-ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** ಪ್ರಾಂತೀಯ ಸಾರಿಗೆ ಅಧಿಕಾರಿಗಳು, (ಸೆಂಟ್ರಲ್) ಕೋರಮಂಗಲ, ಬೆಂಗಳೂರು-34 ರವರು ನೀಡಿರುವ ದೃಢೀಕರಣ ಪತ್ರದ ದಿನಾಂಕ 8.12.2003 ಮತ್ತು 10.3.04

ಮೇಲಿನ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಜಲಾನಯನ ಅಭಿವೃದ್ಧಿ ಇಲಾಖೆ, 7ನೇ ಮಹಡಿ, ಕರ್ನಾಟಕ ಗೃಹ ಮಂಡಳಿ ಕಟ್ಟಡ, ಬೆಂಗಳೂರು-560009 ರವರ ಕಛೇರಿ ಕಟ್ಟಡದ ಆವರಣದಲ್ಲಿರುವ ಹಳೆಯ ಅಂಬಾಸಿಡರ್ ಕಾರುಗಳನ್ನು ನೋಂದಣಿ ಪ್ರಾಧಿಕಾರಿ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ. (ಸೆಂಟ್ರಲ್) ಕೋರಮಂಗಲ, ಬೆಂಗಳೂರು-34 ಇವರು ನೀಡಿರುವ ದೃಢೀಕರಣ ಪತ್ರದ ಆಧಾರದ ಮೇರೆಗೆ ಸದರಿ ವಾಹನಗಳನ್ನು ಟೆಂಡರ್-ಕಂ-ಬಹಿರಂಗ ಹರಾಜಿನ ಮೂಲಕ ದಿನಾಂಕ: 2-5-2004 ರಂದು ಸಂಜೆ 3.00 ಗಂಟೆಗೆ ಸರಿಯಾಗಿ ಈ ಕಛೇರಿಯ ಆವರಣದಲ್ಲಿ ವಾಹನವು ಎಲ್ಲಿದ್ದೆಯೋ ಹೇಗಿದೆಯೋ ಹಾಗೆಯೇ ಟೆಂಡರ್-ಕಂ-ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಸೀಲ್ ಮಾಡಿದ ಟೆಂಡರ್‌ಗಳನ್ನು ಆಯುಕ್ತರ ಕಛೇರಿ, ಜಲಾನಯನ ಅಭಿವದ್ಧಿ ಇಲಾಖೆ, ಕರ್ನಾಟಕ ಗೃಹ ಮಂಡಳಿ ಬ್ಲಾಕ್, 7ನೇ ಮಹಡಿ, ಕಾವೇರಿ ಭವನ, ಕೆ.ಜಿ. ರಸ್ತೆ, ಬೆಂಗಳೂರು-9 ರವರ ಕಛೇರಿಯಲ್ಲಿ ದಿನಾಂಕ 26.5.2004ರ ಅಪರಾಹ್ನ 2 ಗಂಟೆಯ ವರೆಗೆ ಸ್ವೀಕರಿಸಲಾಗುವುದು.

**ವಾಹನಗಳ ವಿವರಗಳು**

| | | | | | | | |
|---|---|---|---|---|---|---|---|
| 1 | ವಾಹನದ ನೋಂದಣಿ ಸಂಖ್ಯೆ | CKG-352 | CTG-529 | CAG-1706 | CTG-527 | CAG-9339 | CAG-6707 |
| 2 | ವಾಹನದ ಮಾದರಿ | ಅಂಬಾಸಿಡರ್ ಪೆಟ್ರೋಲ್ ಕಾರು | ಅಂಬಾಸಿಡರ್ ಪೆಟ್ರೋಲ್ ಕಾರು | ಅಂಬಾಸಿಡರ್ ಪೆಟ್ರೋಲ್ ಕಾರು | ಅಂಬಾಸಿಡರ್ ಪೆಟ್ರೋಲ್ ಕಾರು | ಅಂಬಾಸಿಡರ್ ಪೆಟ್ರೋಲ್ ಕಾರು | ಅಂಬಾಸಿಡರ್ ಪೆಟ್ರೋಲ್ ಕಾರು |
| 3 | ವಾಹನದ ತಯಾರಿಕೆ ವರ್ಷ | 1986 | 1986 | 1984 | 1986 | 1986 | 1986 |
| 4 | ವಾಹನವನ್ನು ತಯಾರಿಸಿದ ಸಂಸ್ಥೆ | ಹಿಂದುಸ್ತಾನ್ ಮೋಟಾರ್ಸ್ ಲಿಮಿಟೆಡ್ | ಹಿಂದುಸ್ತಾನ್ ಅಂಬಾಸಿಡರ್ | ಹಿಂದುಸ್ತಾನ್ ಅಂಬಾಸಿಡರ್ | ಹಿಂದುಸ್ತಾನ್ ಅಂಬಾಸಿಡರ್ ಮೋಟಾರ್ಸ್ | ಅಂಬಾಸಿಡರ್ ಮೋಟಾರ್ಸ್ ಕಂಪನಿ | ಹಿಂದುಸ್ತಾನ್ ಮೋಟಾರ್ಸ್ ಲಿಮಿಟೆಡ್ |
| 5 | ಅಡಿಕಟ್ಟು ಸಂಖ್ಯೆ. (ಚಾಸೀಸ್ ಸಂಖ್ಯೆ) | 111/526464 | D/111517921 | 111/487747 | 111/518097 | 111/514773 | 111/514130 |
| 6 | ಇಂಜಿನ್ ಸಂಖ್ಯೆ | 6EH/19617 | 6EH/012737 | 6EA/011696 | 6EH/013043 | 6EH/011165 | 6EH/004644 |
| 7 | ವಾಹನದ ಸಾಮರ್ಥ್ಯ | 14.89 ಸಿಸಿ | 14.89 ಸಿಸಿ | 13.225 ಸಿಸಿ | 14.89 ಸಿಸಿ | 14.HP | 14.HP |
| 8 | ಆಸನದ ಪ್ರಮಾಣ | 5+1=6 | 5+1=6 | 5+1=6 | 5+1=6 | 5+1=6 | 5+1=6 |

ಆದುದರಿಂದ ವಾಹನದ ಟೆಂಡರ್-ಕಂ-ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಆಸಕ್ತಿಯುಳ್ಳ ಸಾರ್ವಜನಿಕರು ಈ ಕೆಳಕಂಡ ಷರತ್ತುಗಳೊಂದಿಗೆ ದಿನಾಂಕ 26.5.2004 ರಂದು ಸಂಜೆ 03 ಗಂಟೆಗೆ ಸರಿಯಾಗಿ ಈ ಕಛೇರಿಯ ಆವರಣದಲ್ಲಿ ಹಾಜರಾಗಿ ಸದರಿ ಹರಾಜಿನಲ್ಲಿ ಭಾಗವಹಿಸಬೇಕೆಂದು ಈ ಮೂಲಕ ಕೋರಲಾಗಿದೆ.

1. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಕಛೇರಿ ವೇಳೆಯಲ್ಲಿ ಈ ಕಛೇರಿಯಲ್ಲಿ ದಿನಾಂಕ: 26.5.2004 ಬೆಳಿಗ್ಗೆ 02-00 ಗಂಟೆಯ ಒಳಗೆ ಮಾತ್ರ ಸ್ವೀಕರಿಸಲಾಗುವುದು.
2. ಟೆಂಡರ್ ಕಂ ಬಹಿರಂಗ ಹರಾಜನ್ನು ಅಂಗೀಕರಿಸುವ ಮತ್ತು ತಿರಸ್ಕರಿಸುವ ಅಧಿಕಾರವನ್ನು ಟೆಂಡರ್ ಕಂ ಬಹಿರಂಗ ಹರಾಜು ಪ್ರಕ್ರಿಯೆ ನಡೆಸುವ ಅಧಿಕಾರಿಯವರಲ್ಲಿ ಕಾದಿರಿಸಲಾಗಿದೆ.
3. ವಾಹನವನ್ನು ಎಲ್ಲಿದೆಯೋ. ಹೇಗಿದೆಯೋ ಹಾಗೆಯೇ ಟೆಂಡರ್-ಕಂ-ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.
4. ಪ್ರತಿ ವಾಹನಕ್ಕೆ ಠೇವಣಿ ರೂ. 5,000-00 (ರೂ.ಐದು ಸಾವಿರ ಮಾತ್ರ) ಗಳನ್ನು ಈ ಕಛೇರಿಯಿಂದ ಟೆಂಡರ್-ಕಂ-ಬಹಿರಂಗ ಹರಾಜು ಮಾಡುವ ಮುನ್ನ ಈ ಕಛೇರಿಗೆ ಪಾವತಿಸಿ ರಸೀದಿ ಪಡೆಯತಕ್ಕದ್ದು. ಹಾಗೂ ಯಶಸ್ವಿ ಬಿಡ್ದುದಾರರು ಅವರು ನೀಡಿದ ಠೇವಣಿ ಹಣವನ್ನು ಬಿಡ್ಡಿನ ಅಂತಿಮ ಮೊತ್ತಕ್ಕೆ ಹೊಂದಾಣಿಕೆ ಮಾಡಿಕೊಳ್ಳಬಹುದು ಟೆಂಡರ್ ಪ್ರಕರಣದಲ್ಲಿ ಪ್ರತಿ ವಾಹನಕ್ಕೆ ಪ್ರತ್ಯೇಕ ಠೇವಣಿ ನೀಡಬೇಕಾಗುತ್ತದೆ. ಆದರೆ ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಒಂದು ವಾಹನಕ್ಕೆ ನೀಡಿದ ಠೇವಣಿ ಹಣವನ್ನು ಆ ವಾಹನಕ್ಕೆ ಯಶಸ್ವಿಯಾಗದಿದ್ದಲ್ಲಿ ಬೇರೆ ವಾಹನಗಳಿಗೆ ವರ್ಗಾಯಿಸಲು ಅವಕಾಶವಿದೆ. ಬಿಡ್ಡಿನಲ್ಲಿ ಯಶಸ್ವಿಯಾಗದ ಬಿಡ್ದುದಾರರು ಬಹಿರಂಗ ಹರಾಜಿನ ನಂತರ ಠೇವಣಿ ಹಣವನ್ನು ವಾಪಸ್ಸು ಪಡೆಯಬಹುದು.
5. ಟೆಂಡರ್ ಅರ್ಜಿಯಲ್ಲಿ ವಾಹನವನ್ನು ಖರೀದಿಸುವ ಬೆಲೆಯನ್ನು ಅಂಕಿಗಳಲ್ಲಿ ಹಾಗೂ ಅಕ್ಷರಗಳಲ್ಲಿ ಸ್ಪಷ್ಟವಾಗಿ ನಮೂದಿಸಿ ಸಲ್ಲಿಸುವುದು.

6. ಭರ್ತಿ ಮಾಡಿದ ಟೆಂಡರ್ ಅರ್ಜಿಯನ್ನು ಠೇವಣಿ ಹಣ ಪಾವತಿಸಿದ ರಸೀದಿಯೊಂದಿಗೆ ಸೀಲು ಮಾಡಿದ ಲಕೋಟೆಯೊಳಗೆ ಇಟ್ಟು ಲಕೋಟೆಯ ಮೇಲೆ ವಾಹನದ ಸಂಖ್ಯೆಯನ್ನು ನಮೂದಿಸಿ ವಾಹನ ಹರಾಜಿಗೆ ಟೆಂಡರ್ ಎಂಬುದಾಗಿ ಪ್ರತಿ ವಾಹನಕ್ಕೆ ಪ್ರತ್ಯೇಕ ಲಕೋಟೆಯನ್ನು ಮೇಲ್ಕಂಡಂತೆ ನಮೂದಿಸಿ ನಿಗದಿತ ದಿನಾಂಕದೊಳಗೆ ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ, ಕರ್ನಾಟಕ ಗೃಹ ಮಂಡಳಿ ಕಟ್ಟಡ. ಬೆಂಗಳೂರು-560009. ಇವರ ಕಛೇರಿಗೆ ಖುದ್ದಾಗಿಯಾಗಲೀ ಅಥವಾ ಅಂಚೆಯ ಮೂಲಕವಾಗಲೀ ಸಲ್ಲಿಸತಕ್ಕದ್ದು ಹಾಗೂ ನಿಗದಿತ ದಿನಾಂಕದಂದು ಬಹಿರಂಗ ಹರಾಜಿನಲ್ಲಿ ಖುದ್ದಾಗಿ ಭಾಗವಹಿಸತಕ್ಕದ್ದು. ತಪ್ಪಿದ್ದಲ್ಲಿ ಅಂತಹವರ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
7. ಬಹಿರಂಗ ಹರಾಜಿನ ನಂತರ ಸ್ಥಳದಲ್ಲಿ ಹಾಜರಿದ್ದ ಬಿಡ್ಡುದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆರೆಯಲಾಗುವುದು. ಟೆಂಡರ್ ಮತ್ತು ಬಹಿರಂಗ ಹರಾಜು ಈ ಎರಡರಲ್ಲಿ ಯಾವುದು ಹೆಚ್ಚಿನ ಮೊತ್ತವಿದೆಯೋ ಅದನ್ನು ಯಶಸ್ವಿ ಬಿಡ್ಡಿನ ಮೊತ್ತವೆಂದು ಪರಿಗಣಿಸಲಾಗುವುದು.
8. ಯಶಸ್ವಿ ಬಿಡ್ಡುದಾರರು ಠೇವಣಿ ಹಣವೂ ಸೇರಿದಂತೆ ಬಿಡ್ಡಿನ ಮೊತ್ತದ ಶೇಕಡ 25 ರಷ್ಟು ಹಣವನ್ನು ತಕ್ಷಣ ಸ್ಥಳದಲ್ಲೇ ಹಾಜರಿರುವ ನಿಯೋಜಿತ ಅಧಿಕಾರಿಯವರಿಗೆ ಪಾವತಿಸತಕ್ಕದ್ದು.
9. ಸದರಿ ಟೆಂಡರ್ ಕಂ-ಬಹಿರಂಗ- ಹರಾಜು ಪ್ರಕ್ರಿಯೆ ನಂತರ ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರು ಅನುಮೋದಿಸಿದ ಮೇಲೆ ಯಶಸ್ವಿ ಬಿಡ್ಡುದಾರರು ಉಳಿಕೆ ಹಣದೊಂದಿಗೆ ನಿಯಮಾನುಸಾರ ಮಾರಾಟ ತೆರಿಗೆ ಮತ್ತು ಸೆಸ್ ಇತ್ಯಾದಿ ಹಣವನ್ನು ಸೂಚಿತ ಅವಧಿಯೊಳಗೆ ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು, ಇವರಿಗೆ ಪಾವತಿ ಮಾಡುವುದು ತಪ್ಪಿದಲ್ಲಿ ಇವರು ಪಾವತಿಸಿರುವ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
10. ಯಶಸ್ವಿ ಬಿಡ್ಡುದಾರರು ತಮ್ಮ ಸ್ವಂತ ಖರ್ಚಿನಲ್ಲಿ ವಾಹನದ ಮಾಲೀಕತ್ವ ವರ್ಗಾವಣೆ ಹಾಗೂ ವಾಹನದ ಸಾಗಾಣಿಕೆ ಮಾಡಿಕೊಳ್ಳತಕ್ಕದ್ದು.
11. ಟೆಂಡರ್ ಕಂ-ಬಹಿರಂಗ- ಹರಾಜು ಪ್ರಕ್ರಿಯೆಯನ್ನು ನಡೆಸಲು ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು ರವರಿಂದ ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಯವರು ಅಧಿಕಾರವನ್ನು ಹೊಂದಿರುತ್ತಾರೆ. ವಾಹನವನ್ನು ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ, ಕರ್ನಾಟಕ ಗೃಹ ಮಂಡಳಿ ಕಟ್ಟಡದ ಆವರಣ, ಬೆಂಗಳೂರಿನಲ್ಲಿ ಎಲ್ಲಿದೆಯೋ, ಹೇಗಿದೆಯೋ ಹಾಗೆಯೇ ಕಛೇರಿ ವೇಳೆಯಲ್ಲಿ ವೀಕ್ಷಿಸಬಹುದಾಗಿದೆ.
12. ಹೆಚ್ಚಿನ ಮಾಹಿತಿಗಳನ್ನು ಕಛೇರಿ ವೇಳೆಯಲ್ಲಿ ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ, 7ನೇ ಮಹಡಿ, ಕರ್ನಾಟಕ ಗೃಹ ಮಂಡಳಿ ಬ್ಲಾಕ್ ಕೆ.ಜಿ. ರಸ್ತೆ, ಬೆಂಗಳೂರು-9 ಇವರಿಂದ ಪಡೆಯಬಹುದು.
13. ಈ ಆರು ಅಂಬಾಸಿಡರ್ ಕಾರುಗಳು, ಈಗ ಚಾಲನೆಯಲ್ಲಿ ಇಲ್ಲದ ಪ್ರಯುಕ್ತ ಇವುಗಳ ವಿಮಾ ಪಾಲಿಸಿ ಹಾಗೂ ತೆರಿಗೆ ವಿನಾಯ್ತಿಗಳು ನವೀಕರಣವಾಗಿರುವುದಿಲ್ಲ. ಇವುಗಳನ್ನು ಯಶಸ್ವಿ ಬಿಡ್ಡುದಾರರು ಸ್ವಂತ ಖರ್ಚಿನಲ್ಲಿ ಮಾಡಿಸಿಕೊಳ್ಳತಕ್ಕದ್ದು.

ಪಿ.ಆರ್. 174 ಆಯುಕ್ತರ ಪರವಾಗಿ, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು.

**ಉಪ ಕೃಷಿ ನಿರ್ದೇಶಕರ ಕಛೇರಿ, ಜಿಲ್ಲಾ ಕೃಷಿ ತರಬೇತಿ ಕೇಂದ್ರ, ಆರ್.ಕೆ. ಶಾಲಾ, ರಾಮಕೃಷ್ಣಪುರ, ಚಂದಾಪುರ ಅಂಚೆ, ಆನೇಕಲ್ ತಾಲ್ಲೂಕು ಬೆಂಗಳೂರು ನಗರ ಜಿಲ್ಲೆ**

**ಪ್ರಕಟಣೆ**

**ಸಂ.ಉಕೃನಿ:ಜಕೃತಕೇ:ಆರ್‌ಕೆಶಾ:2003-04ನೇ ಸಾಲು:ಫಸಲು:ಹರಾಜು ದಿನಾಂಕ ತಿದ್ದುಪಡಿ:1297:2003-04**

**ದಿನಾಂಕ: 7ನೇ ಏಪ್ರಿಲ್ 2004**

**ವಿಷಯ:** ಜಿಲ್ಲಾ ಕೃಷಿ ತರಬೇತಿ ಕೇಂದ್ರ, ಆರ್.ಕೆ. ಶಾಲೆಯಲ್ಲಿ 37 ತೆಂಗಿನ ಮರಗಳು, 31 ಗೋಡಂಬಿ ಮರಗಳ ಮತ್ತು 11 ಹಲಸಿನ ಮರಗಳ ಫಸಲನ್ನು ಬಹಿರಂಗ ಹರಾಜಿನ ದಿನಾಂಕ ತಿದ್ದುಪಡಿ.

**ಉಲ್ಲೇಖ:** ಸಂ.ಉಕೃನಿ:ಜಕೃತಕೇ:ಆರ್‌ಕೆಶಾ: ಫಸಲು ಹರಾಜು ಪ್ರಕಟಣೆ ನಂ.1290:03-04, ತಾ: 20-3-2004.

ಈ ಮೂಲಕ ಸಾರ್ವಜನಿಕರಿಗೆ ತಿಳಿಸಬಯಸುವುದೇನೆಂದರೆ, ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕ್, ಚಂದಾಪುರ ಅಂಚೆ, ರಾಮಕೃಷ್ಣಪುರ ಗ್ರಾಮ, ಜಿಲ್ಲಾ ಕೃಷಿ ತರಬೇತಿ ಕೇಂದ್ರ, ಆರ್.ಕೆ. ಶಾಲೆಯ ಆವರಣದಲ್ಲಿ ಕೃಷಿ ಕ್ಷೇತ್ರದ ತೆಂಗು, ಗೋಡಂಬಿ ಮತ್ತು ಹಲಸು ಮರಗಳ ಫಸಲನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ಪ್ರಕಟಣೆಯಲ್ಲಿ ದಿನಾಂಕ 19-4-2004 ರಂದು ನಿಗದಿಪಡಿಸಿದ ದಿನವನ್ನು ಚುನಾವಣೆಯ ಪ್ರಯುಕ್ತ ಮುಂದುವರೆಸಿ ದಿನಾಂಕ 10-5-2004 ಎಂದು ತಿದ್ದುಪಡಿ ಮಾಡಿಸಿ ಓದು ಬಯಸುವುದು.

ಪಿ.ಆರ್. 175 ಉಪ ಕೃಷಿ ನಿರ್ದೇಶಕರು, ಜಿಲ್ಲಾ ಕೃಷಿ ತರಬೇತಿ ಕೇಂದ್ರ, ಆರ್.ಕೆ. ಶಾಲಾ, ಆನೇಕಲ್ ತಾ।

**FORM IV**

**(See Rule 12)**

**NOTICE**

It is hereby notified that the undersigned has changed his/her name from **S.G. LAMANI** to **S.G. RATHOD**

P.D. 55 **S.G. RATHOD**